67

# ಜ್ಯೋತಿಷ್ಯ ಮತ್ತು ಇಸ್ಲಾಮ್



الحركة النصيحة الإسلامية

ANNASEEHA ISLAMIC MOVEMENT

SURATKAL, MANGALORE - 575014

# ಜ್ಯೋತಿಷ್ಯ ಮತ್ತು ಇಸ್ಲಾಮ್

ನಿಜ ಹೇಳುವುದಾದರೆ ಇಸ್ಲಾಂ ಧರ್ಮಕ್ಕಿಂತಲೂ ದೊಡ್ಡ ಅನುಗ್ರಹ ಈ ಜಗತ್ತಿನಲ್ಲಿ ಬೇರಾವುದೂ ಇಲ್ಲ. ಅಲ್ಲಾಹು ನಮ್ಮನ್ನು ಮುಸಲ್ಮಾನರನ್ನಾಗಿ ಮಾಡಿದ್ದು ಅತಿ ದೊಡ್ಡ ಅನುಗ್ರಹವಾಗಿದೆ. ಅದಕ್ಕಿಂತಲೂ ದೊಡ್ಡ ಅನುಗ್ರಹ ಬೇರೆಯಿಲ್ಲ. ಆದ್ದರಿಂದ ಆ ಅನುಗ್ರಹವನ್ನು ಸಂರಕ್ಷಿಸು-ವುದು ಮತ್ತು ನಮ್ಮ ಜೀವನದ ಕಟ್ಟಕಡೆಯ ನಿಮಿಷದ ತನಕ ಇಸ್ಲಾಂ ಧರ್ಮದಲ್ಲಿ ಗಟ್ಟಿಯಾಗಿ ನೆಲೆಯೂರುವು-ದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ಇಸ್ಲಾಂ ಎಂಬ ಅನುಗ್ರಹವು ನಮ್ಮಿಂದ ನಿವಾರಣೆ-ಯಾಗುವ ಅನೇಕ ದಾರಿಗಳಿವೆ. ನಮ್ಮ ವಿಶ್ವಾಸವನ್ನು ಕಸಿಯಲು, ನಮ್ಮನ್ನು ಸತ್ಯನಿಷೇಧಿಗಳನ್ನಾಗಿ ಮಾಡಲು ನಮ್ಮ ಸುತ್ತಲೂ ರಣಹದ್ದುಗಳು ಕಾತರದಿಂದ ಕಾಯು-ತ್ತಿವೆ. ಈ ರಣಹದ್ದುಗಳ ಕೈಯಿಂದ ನಮ್ಮ ಈಮಾನನ್ನು

ಸಂರಕ್ಷಿಸುವುದು ಪ್ರಯಾಸಕರ ಸಂಗತಿಯೇ ಸರಿ. ಇಂತಹ ರಣಹದ್ದುಗಳಲ್ಲಿ ಒಂದು ಜ್ಯೋತಿಷಿಗಳಾಗಿದ್ದಾರೆ.

ಮನುಷ್ಯನಿಗೆ ಕಷ್ಟ ಬರುವುದು ಸಹಜ. ಕಷ್ಟ ಬರುವಾಗ ಅದನ್ನು ತಾಳ್ಮೆಯಿಂದ ಎದುರಿಸಬೇಕೆಂದು ಇಸ್ಲಾಂ ಹೇಳುತ್ತದೆ. ಕಷ್ಟ ಎನ್ನುವುದು ಒಂದು ಪರೀಕ್ಷೆ. ಅಲ್ಲಾಹು ಮನುಷ್ಯನಿಗೆ ಕಷ್ಟ ಕೊಟ್ಟು ಅವನ ಪ್ರತಿಕ್ರಿಯೆ ಹೇಗಿರುತ್ತ-ದೆಯೆಂದು ನೋಡುತ್ತಾನೆ. ಅಲ್ಲಾಹನಿಂದ ಪ್ರತಿಫಲವನ್ನು ಆಶಿಸಿ ಕಷ್ಟವನ್ನು ಸಹಿಸಿ ಜೀವಿಸುವವನನ್ನು ಅಲ್ಲಾಹು ಅನುಗ್ರಹಿಸುತ್ತಾನೆ.

ಮದುವೆಯಾಗಿ ಅನೇಕ ವರ್ಷಗಳಾದರೂ ಮಗುವಾಗದೆ ಇರುವವರು, ಹಲವು ವರ್ಷಗಳಾಗಿಯೂ ವಾಸಿಯಾಗದ ಕಾಯಿಲೆಯನ್ನು ಹೊಂದಿರುವವರು, ಮಗಳಿಗೆ ಯೋಗ್ಯ ಗಂಡು ಸಿಗದೆ ಕಷ್ಟಪಡುವವರು, ಪದವೀಧರನಾಗಿಯೂ ಉದ್ಯೋಗವಿಲ್ಲದೆ ಕೊರಗುವವರು, ವ್ಯಾಪಾರದಲ್ಲಿ ನಷ್ಟ ಅನುಭವಿಸುವವರು ಹೀಗೆ ಅನೇಕ ರೀತಿಯಲ್ಲಿ ಮನುಷ್ಯ-

ನಿಗೆ ಕಷ್ಟ ಕೊಟ್ಟು ಅಲ್ಲಾಹು ಪರೀಕ್ಷಿಸುತ್ತಾನೆ. ಆದರೆ ಗಟ್ಟಿ ಈಮಾನ್ ಇರುವ ಕೆಲವರ ಹೊರತು ಇತರರೆಲ್ಲರೂ ಈ ಪರೀಕ್ಷೆಯಲ್ಲಿ ಜಯಗಳಿಸುವುದು ವಿರಳ.

ಜನರಲ್ಲಿ ಹೆಚ್ಚಿನವರೂ ಕಷ್ಟವನ್ನು ಸಹಿಸುವುದು ಬಿಟ್ಟು ಅಲ್ಲಾಹು ವಿರೋಧಿಸಿದ ಮಾರ್ಗಗಳ ಮೂಲಕ ಅದನ್ನು ನಿವಾರಿಸಲು ಪ್ರಯತ್ನಿಸುತ್ತಾರೆ. ಕಷ್ಟ ಬಂದಾಗ ಜ್ಯೋ-ತಿಷಿಗಳ ಬಳಿಗೆ ತೆರಳಿ ಅವರಲ್ಲಿ ಪರಿಹಾರ ಕೇಳುವುದು ಇಂದು ಒಂದು ಫ್ಯಾಶನ್ ಆಗಿ ಮಾರ್ಪಟ್ಟಿದೆ.

ಕಷ್ಟ ಬರುವಾಗ ಮಾತ್ರವಲ್ಲ, ಒಂದು ಶುಭಕಾರ್ಯವನ್ನು ಮಾಡುವಾಗಲೂ ಸಹ ಜ್ಯೋತಿಷಿಗಳ ಕದ ತಟ್ಟದವರು ಬಹಳ ವಿರಳ. ಮನೆ ಕಟ್ಟಲು ಸ್ಥಳವನ್ನು ಖರೀದಿಸುವುದ-ರಿಂದ ತೊಡಗಿ, ಮನೆಯ ಆಕಾರ, ದಿಕ್ಕು, ಅಡುಗೆಮನೆ, ಶಯನಗೃಹ ಎಲ್ಲಿರಬೇಕು, ಎಷ್ಟು ಕೋಣೆಗಳಿರಬೇಕು, ಮಹಡಿ ಬೇಕೇ ಬೇಡವೇ, ಮನೆಯನ್ನು ಪ್ರವೇಶಿಸಲು ಎಷ್ಟು ಮೆಟ್ಟಿಲುಗಳಿರಬೇಕು, ಗೇಟು ಎಲ್ಲಿ ನಿರ್ಮಿಸಬೇಕು

ಹೀಗೆ ಗೃಹಪ್ರವೇಶದ ತನಕ ಎಲ್ಲವನ್ನೂ ಜ್ಯೋತಿಷಿಗಳ ನಿರ್ದೇಶನದ ಪ್ರಕಾರ ನಿರ್ವಹಿಸಲಾಗುತ್ತದೆ.

ಮಗಳಿಗೆ ಗಂಡು ಹುಡುಕುವುದರಿಂದ ತೊಡಗಿ, ಅವನ ನಕ್ಷತ್ರ ಹೇಗಿರಬೇಕು, ಅವನು ಎಂತಹ ಉದ್ಯೋಗದವ-ನಾಗಿರಬೇಕು, ವಿವಾಹ ಎಲ್ಲಿ ನಡೆಯಬೇಕು, ಹೇಗೆ ನಡೆ-ಯಬೇಕು, ಎಷ್ಟು ಜನರನ್ನು ಆಮಂತ್ರಿಸಬೇಕು ಎಲ್ಲವೂ ಜ್ಯೋತಿಷಿಗಳ ನಿರ್ದೇಶನ ಪ್ರಕಾರವೇ ನಡೆಯುತ್ತದೆ. ಇಂದು ಜನರು ತಮ್ಮ ಜೀವನದ ಎಲ್ಲಾ ಆಗುಹೋಗುಗ-ಳಲ್ಲೂ ಜ್ಯೋತಿಷಿಗಳ ಮಧ್ಯಪ್ರವೇಶವನ್ನು ಬಯಸುತ್ತಾರೆ. ಜ್ಯೋತಿಷಿಗಳಲ್ಲಿ ಕೇಳದೆ ಏನೂ ಮಾಡದಂತಹ ಒಂದು ಸ್ಥಿತಿಗೆ ಜನರು ತಲುಪಿಬಿಟ್ಟಿದ್ದಾರೆ. ಇದಕ್ಕೆ ಮುಸಲ್ಮಾನರೂ ಹೊರತಲ್ಲ.

## ಜ್ಯೋತಿಷಿಗಳು ಎಂದರೆ ಯಾರು?

ಜ್ಯೋತಿಷಿಗಳು ಎಂದರೆ ಹೃದಯದಲ್ಲಿ ಉಂಟಾಗುವ

ವಿಷಯಗಳು, ಭವಿಷ್ಯದಲ್ಲಿ ಸಂಭವಿಸುವ ವಿಷಯಗಳು, ಅಗೋಚರ ವಿಷಯಗಳು ಮುಂತಾದವುಗಳು ತಿಳಿದಿವೆ ಎಂದು ವಾದಿಸುವವರು. ಇವರಲ್ಲಿ ಕೆಲವರು ನಕ್ಷತ್ರಗಳನ್ನು ನೋಡುವ ಮೂಲಕ ಭವಿಷ್ಯ ಹೇಳುತ್ತಾರೆ. ಕೆಲವರು ನೆಲದಲ್ಲಿ ಗೆರೆಗಳನ್ನು ಎಳೆದು ಭವಿಷ್ಯ ಹೇಳುತ್ತಾರೆ. ಕೆಲವರು ರಾಶಿಗಳನ್ನು ಅಥವಾ ಹಸ್ತವನ್ನು ನೋಡಿ ಭವಿಷ್ಯ ಹೇಳುತ್ತಾರೆ. ಕೆಲವರು ಗಿಳಿ ಮುಂತಾದ ಹಕ್ಕಿಗಳನ್ನು ಬಳಸಿ ಭವಿಷ್ಯ ಹೇಳುತ್ತಾರೆ. ಉಂಗುರಗಳನ್ನು ನೋಡಿ, ಮೊಟ್ಟೆಗಳನ್ನು ಮಂತ್ರಿಸಿ ಭವಿಷ್ಯ ಹೇಳುವವರೂ ಇದ್ದಾರೆ. ಅದೃಷ್ಟ ಹೇಳುವವರು, ಕಣಿಗಾರರು, ಜಾದೂಗಾರರು, ಹಸ್ತಸಾಮುದ್ರಿಕರು, ಮಾಟಗಾರರು, ಮಂತ್ರವಾದಿಗಳು, ಬೀಬಿಗಳು, ಬಾಬಾಗಳು, ದೇವಮಾನವರು, ಅಮ್ಮಗಳು, ಅಜ್ಜಗಳು, ಅಜ್ಜಿಗಳು ಮುಂತಾದವರೆಲ್ಲರೂ ಜ್ಯೋತಿಷಿಗಳಾಗಿದ್ದಾರೆ.

# ಜ್ಯೋತಿಷಿಗಳಲ್ಲಿರುವ ವಿಧಗಳು

ಜ್ಯೋತಿಷಿಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು.

1. ನಿಜವಾದ ಜ್ಞಾನವಾಗಲಿ, ರಹಸ್ಯಗಳಾಗಲಿ ತಿಳಿದಿಲ್ಲದ, ಆದರೆ ಜನರಲ್ಲಿ ಹೆಚ್ಚಿನವರಿಗೆ ಸಂಭವಿಸುವ ಸಾಮಾನ್ಯ ಘಟನೆಗಳನ್ನು ಆಧಾರವಾಗಿಟ್ಟು ತಮ್ಮ ಊಹೆಯ ಪ್ರಕಾರ ಭವಿಷ್ಯ ಹೇಳುವವರು. ಇವರು ಗ್ರಾಹಕರ ವಿಶ್ವಾಸ ಗಳಿಸಲು ವಿಭಿನ್ನ ಆಚರಣೆಗಳನ್ನು ಮಾಡುತ್ತಾರೆ. ಉಂಗುರ ನೋಡುವುದು, ಮೊಟ್ಟೆಯಲ್ಲಿ ಬರೆಯುವುದು, ಕಾಗದದ ತುಂಡಲ್ಲಿ ಅಡ್ಡಾದಿಡ್ಡಿ ಗೆರೆಗಳನ್ನು ಎಳೆದು ಏನೋ ಯೋಚನೆಯಲ್ಲಿ ಮಗ್ನರಾದಂತೆ ನಟಿಸುವುದು, ಕಪ್ಪೆ ಚಿಪ್ಪಿಗಳನ್ನು ಹರಡಿ ಏನೇನೋ ಮಾಡುವುದು, ಹಸ್ತವನ್ನು ಒತ್ತಿ ಒತ್ತಿ ಪರೀಕ್ಷಿಸುವುದು ಇವರ ಕೆಲವು ತಂತ್ರಗಳಾಗಿವೆ.

ಜನರಿಗೆ ಸಾಮಾನ್ಯವಾಗಿ ಸಂಭವಿಸುವ ಘಟನೆಗಳ

ಆಧಾರದಲ್ಲಿ ಇವರು ಭವಿಷ್ಯ ಹೇಳುವುದರಿಂದ ಕೆಲವು ಸಂದರ್ಭಗಳಲ್ಲಿ ಕಾಕತಾಳೀಯವಾಗಿ ಇವರ ಭವಿಷ್ಯ ನಿಜವಾಗುವುದಿದೆ. ಆದರೆ ಹೆಚ್ಚಿನ ಭವಿಷ್ಯಗಳೂ ಸುಳ್ಳಾ-ಗಿರುತ್ತವೆ. ಆದರೆ ಜನರ ಮಧ್ಯೆ ಪ್ರಚಾರವಾಗುವುದು ಸತ್ಯವಾಗಿ ಪರಿಣಮಿಸಿದ ಭವಿಷ್ಯಗಳು ಮಾತ್ರ. ಒಬ್ಬ ವೈದ್ಯ ನೂರು ಶಸ್ತ್ರಕ್ರಿಯೆಗಳನ್ನು ಮಾಡಿ ಅದರಲ್ಲಿ 99 ಯಶ-ಸ್ವಿಯಾಗಿ ಒಂದು ವಿಫಲವಾದರೂ ಸಹ ಆ ವಿಫಲವಾದ ಘಟನೆ ಜನರ ಮಧ್ಯೆ ಪ್ರಚಾರ ಪಡೆಯುತ್ತದೆ. ಜನರು ಅವನ ಬಳಿಗೆ ಹೋಗಲು ನೂರು ಬಾರಿ ಯೋಚಿಸು-ತ್ತಾರೆ. ಆದರೆ ಒಬ್ಬ ಜ್ಯೋತಿಷಿಯ ಸ್ಥಿತಿ ಹಾಗಲ್ಲ. ಆತ ಹೇಳುವ ನೂರು ಭವಿಷ್ಯಗಳಲ್ಲಿ 99 ಸುಳ್ಳಾಗಿ ಒಂದು ಸತ್ಯವಾಗಿ ಪರಿಣಮಿಸಿದರೆ,  ಸತ್ಯವಾಗಿ ಪರಿಣಮಿಸಿದ ಆ ಭವಿಷ್ಯವೇ ಜನರ ಮಧ್ಯೆ ಪ್ರಚಾರ ಪಡೆಯುತ್ತದೆ. ಇದು ಜನರು ಆತನ ಬಳಿಗೆ ಹೆಚ್ಚಿನ ಪ್ರಮಾಣದಲ್ಲಿ ಬರಲು ಸಹಾಯ ಮಾಡುತ್ತದೆ. ಮಾತ್ರವಲ್ಲ, ಕೆಲವು

ಜ್ಯೋತಿಷಿಗಳು ತಮ್ಮ ಬಗ್ಗೆ ಪ್ರಚಾರ ಮಾಡಲು ಬಾಡಿಗೆ ಪ್ರಚಾರಕರನ್ನು ಸಹ ಇಟ್ಟುಕೊಂಡಿರುತ್ತಾರೆ.

2. ಜಿನ್ನ್‌ಗಳ ಸಹಾಯ ಪಡೆದು ಭವಿಷ್ಯ ಹೇಳುವವರು. ಇವರು ಬಹಳ ಅಪಾಯಕಾರಿ ಜನರು. ಏಕೆಂದರೆ ಇವರು ಕೈ ಹಾಕುವುದು ನೇರವಾಗಿ ನಮ್ಮ ವಿಶ್ವಾಸಕ್ಕೆ. ಜನರು ಶಿರ್ಕ್ ಮಾಡಲು ಇವರು ಮುಖ್ಯ ಪಾತ್ರ ವಹಿಸು-ತ್ತಾರೆ. ಇವರು ತಮ್ಮ ಗ್ರಾಹಕರೊಂದಿಗೆ ಜಿನ್ನ್‌ಗಳೊಂದಿಗೆ ಪ್ರಾರ್ಥಿಸಲು, ಅವರಿಗೆ ಬಲಿ ನೀಡಲು, ಅವರ ಆರಾಧನೆ ಮಾಡಲು ಕರೆ ಕೊಡುತ್ತಾರೆ. ಜಿನ್ನ್‌ಗಳ ಹೆಸರನ್ನು ಬರೆದು ಕೊಟ್ಟು ಈ ಹೆಸರನ್ನು ನೂರು ಸಲ, ಅಥವಾ ಸಾವಿರ ಸಲ ಏಕಾಂತದಲ್ಲಿ ಕೂತು ಕರೆಯುವಂತೆ ಹೇಳುತ್ತಾರೆ. ಪ್ರಾಣಿ ಬಲಿ ನೀಡುವಂತೆ, ಕೆಲವೊಮ್ಮೆ ಮನುಷ್ಯ ಬಲಿ ನೀಡುವಂತೆಯೂ ಹೇಳುತ್ತಾರೆ. ಕೆಲವು ದರ್ಗಾಗ-ಳಿಗೆ ಕಾಣಿಕೆ ಅರ್ಪಿಸಲು ಅಥವಾ ಹರಕೆ ಹೊರಲು ಹೇಳುತ್ತಾರೆ. ಕೆಲವು ದಿನಗಳ ಕಾಲ ವ್ರತ ಆಚರಿಸುವಂತೆ

ಹೇಳುತ್ತಾರೆ. ಇವೆಲ್ಲವೂ ಜಿನ್ನ್‌ಗಳನ್ನು ತೃಪ್ತಿಪಡಿಸುವು-ದಕ್ಕಾಗಿ. ಜಿನ್ನ್‌ಗಳನ್ನು ತೃಪ್ತಿಪಡಿಸುವುದೇ ಇವರ ಮುಖ್ಯ ಉದ್ದೇಶ. ಜಿನ್ನ್‌ಗಳ ಆರಾಧನೆ ಮಾಡಿದರೆ ಜಿನ್ನ್‌ಗಳು ಇವರಿಗೆ ಕೆಲವು ವಿಷಯಗಳಲ್ಲಿ ಸಹಾಯ ಮಾಡುತ್ತಾರೆ.

ಈ ವಿಧದವರು ಹೇಳುವ ಭವಿಷ್ಯಗಳು ಮೊದಲ ವಿಧದವರು ಹೇಳುವ ಭವಿಷ್ಯಗಳಿಗಿಂತ ಸರಾಸರಿ ಹೆಚ್ಚು ಸತ್ಯವಾಗಿರುತ್ತದೆ. ಒಮ್ಮೆ ಸಹಾಬಿಗಳು ಪ್ರವಾದಿಯವ-ರೊಡನೆ(ಸ) ಜ್ಯೋತಿಷಿಗಳ ಬಗ್ಗೆ ವಿಚಾರಿಸಿದರು. ಆಗ ಪ್ರವಾದಿಯವರು(ಸ) ಹೇಳಿದರು: "ಅವರು ಏನೂ ಅಲ್ಲ." ಅಂದರೆ ಅವರ ಮಾತುಗಳಲ್ಲಿ ಯಾವುದೇ ಸತ್ಯವಿಲ್ಲ. ಸಹಾಬಿಗಳು ಕಾತರದಿಂದ ಕೇಳಿದರು: "ಪ್ರವಾದಿಯವರೇ, ಅವರು ಹೇಳಿದ ಮಾತುಗಳು ಕೆಲವೊಮ್ಮೆ ಸತ್ಯವಾಗುತ್ತದೆಯಲ್ಲವೇ?" ಏಕೆಂದರೆ ಇಂತಹ ಸತ್ಯವಾಗಿ ಪರಿಣಮಿಸಿದ ಮಾತುಗಳೇ ಜನರ ಮಧ್ಯೆ ಪ್ರಚಾರವಾಗುತ್ತದೆ.

ಇದಕ್ಕೆ ಪ್ರವಾದಿಯವರು(ಸ) ನೀಡಿದ ಉತ್ತರ ಅತ್ಯಂತ ಮಾರ್ಮಿಕವಾಗಿತ್ತು. ಪ್ರವಾದಿಯವರು(ಸ) ಉತ್ತರಿಸಿದರು: "ಹೌದು, ಆ ಮಾತುಗಳು ಸತ್ಯ. ಅದು ಜಿನ್ನ್‌ಗಳು ಕದ್ದಾಲಿಸಿದ ಮಾತುಗಳು. ಕೋಳಿ ಕೂಗುವಂತೆ ಅವರು ಆ ಮಾತುಗಳನ್ನು ಜ್ಯೋತಿಷಿಗಳ ಕಿವಿಗಳಲ್ಲಿ ಹಾಕುತ್ತಾರೆ. ಜ್ಯೋತಿಷಿಗಳು ಆ ಮಾತುಗಳೊಂದಿಗೆ ನೂರು ಸುಳ್ಳು-ಗಳನ್ನು ಬೆರೆಸಿ ಜನರಿಗೆ ಹೇಳುತ್ತಾರೆ." (ಅಲ್ ಬುಖಾರಿ ಮತ್ತು ಮುಸ್ಲಿಂ)

## ಜ್ಯೋತಿಷಿಗಳ ಬಗ್ಗೆ ಇಸ್ಲಾಂ ಏನು ಹೇಳುತ್ತದೆ?

ಮುಆವಿಯ ಇಬ್ನುಲ್ ಹಕಂ(ರ) ರಿಂದ ವರದಿ: ಅವರೊಮ್ಮೆ ಪ್ರವಾದಿಯೊಡನೆ(ಸ) ಕೇಳಿದರು: "ಪ್ರವಾ-ದಿಯವರೇ ನಮ್ಮ ಊರಿನ ಜನರು ಜ್ಯೋತಿಷಿಗಳ ಬಳಿಗೆ ಹೋಗುತ್ತಾರೆ." ಆಗ ಪ್ರವಾದಿಯವರು(ಸ) ಹೇಳಿದರು:

“ನೀನು ಅವರ ಬಳಿಗೆ ಹೋಗಬಾರದು.” (ಮುಸ್ಲಿಂ)

ಇಂದು ನಡೆಯುತ್ತಿರುವಂತೆಯೇ ಜಾಹಿಲಿಯ್ಯ ಕಾಲದಲ್ಲೂ ಕೂಡ ಜನರು ತಮ್ಮ ಜೀವನದಲ್ಲಿ ತಾವು ತೆಗೆದುಕೊಳ್ಳುವ ಯಾವುದೇ ತೀರ್ಮಾನಕ್ಕೂ ಜ್ಯೋತಿಷಿಗಳನ್ನು ಸಮೀಪಿಸುವುದು ವಾಡಿಕೆಯಾಗಿತ್ತು. ಶಕುನ ನೋಡುವುದು, ಶುಭ–ಅಶುಭಗಳನ್ನು ನಂಬುವುದು, ಭವಿಷ್ಯವೇನೆಂದು ತಿಳಿದು ಅದರ ಪ್ರಕಾರ ಕಾರ್ಯಪ್ರವೃತ್ತರಾಗುವುದು ಅಂದು ಸಾಮಾನ್ಯವಾಗಿತ್ತು. ಆದ್ದರಿಂದ ಮುಆವಿಯ(ರ) ಪ್ರವಾದಿಯವರೊಡನೆ(ಸ) ಇದರ ಬಗ್ಗೆ ಕೇಳಿದಾಗ, ಪ್ರವಾದಿಯವರು(ಸ) ಅದನ್ನು ವಿರೋಧಿಸಿದರು.

ಜ್ಯೋತಿಷಿಗಳು ಮುಸಲ್ಮಾನರಾದರೆ ಅವರ ಬಳಿಗೆ ಹೋಗಬಹುದೆಂಬ ಅಭಿಪ್ರಾಯ ಕೆಲವರಿಗಿದೆ. ಅಂದರೆ ಬಾಬಾ ಬೀಬಿಗಳ ಬಳಿಗೆ, ಅಥವಾ ತಂಗಳ್‌ಗಳ ಬಳಿಗೆ ಹೋಗಬಹುದು ಎಂದು ಕೆಲವರು ಹೇಳುತ್ತಾರೆ.

ಆದರೆ ಇಲ್ಲಿ ಪ್ರವಾದಿಯವರು(ಸ) ಜ್ಯೋತಿಷಿಗಳು ಮುಸಲ್ಮಾನರೋ ಅಲ್ಲವೋ ಎಂದು ಕೇಳುವುದಿಲ್ಲ. ಮುಸಲ್ಮಾನರಾದರೆ ಹೋಗಬಹುದು ಎನ್ನುವುದಿಲ್ಲ. ಬದಲಾಗಿ ಜ್ಯೋತಿಷಿಗಳು ಯಾರೇ ಆದರೂ ಅವರ ಬಳಿಗೆ ಹೋಗಬಾರದು ಎನ್ನುತ್ತಾರೆ. ಜ್ಯೋತಿಷಿಗಳ ಬಳಿಗೆ ತೆರಳುವುದನ್ನು ಅನಿರ್ಬಂಧಿತವಾಗಿ ವಿರೋಧಿಸುತ್ತಾರೆ.

ಇಮ್ರಾನ್ ಇಬ್ನ್ ಹುಸೈನ್(ರ) ರಿಂದ ವರದಿ: ಪ್ರವಾ-ದಿಯವರು(ಸ) ಹೇಳಿದರು: “ಶಕುನ ನೋಡುವವರು ಮತ್ತು ನೋಡಿಸುವವರು, ಭವಿಷ್ಯ ಹೇಳುವವರು ಮತ್ತು ಹೇಳಿಸುವವರು, ಮಾಟ ಮಾಡುವವರು ಮತ್ತು ಮಾ-ಡಿಸುವವರು ನಮ್ಮಲ್ಲಿ ಸೇರಿದವರಲ್ಲ.” (ಅಲ್ ಬಝ್ಝಾರ್ ಮತ್ತು ಅತ್ತಬರಾನಿ)

ಪ್ರವಾದಿಯವರು(ಸ) ಯಾವುದಾದರೂ ಒಂದು ವಿಷಯದ ಬಗ್ಗೆ ಅದನ್ನು ಮಾಡುವವರು ನಮ್ಮಲ್ಲಿ ಸೇರಿದವರಲ್ಲ ಎಂದು ಹೇಳಿದರೆ ಅದು ಬಹಳ ಗಂಭೀರ

ವಿಷಯವಾಗಿದೆ ಎಂದರ್ಥ. ಮಹಾ ಪಾಪಗಳು ಮತ್ತು ಗಂಭೀರ ಸಂಗತಿಗಳ ಹೊರತು ಇತರ ವಿಷಯಗಳ ಬಗ್ಗೆ ಪ್ರವಾದಿಯವರು(ಸ) ಈ ಪದಗಳನ್ನು ಬಳಸುವುದಿಲ್ಲ. ಭವಿಷ್ಯ ಹೇಳುವವರು ಮತ್ತು ಹೇಳಿಸುವವರು ಎಂದರೆ ಭವಿಷ್ಯ ನುಡಿಯುವವರು ಮತ್ತು ಭವಿಷ್ಯ ಕೇಳಲು ಅವರ ಬಳಿಗೆ ಹೋಗುವವರು. ಇಬ್ಬರೂ ನಮ್ಮವರಲ್ಲ, ಅಂದರೆ ಇಸ್ಲಾಂ ಧರ್ಮಕ್ಕೆ ಸೇರಿದವರಲ್ಲ ಎಂದು ಪ್ರವಾದಿಯವ-ರು(ಸ) ಇಲ್ಲಿ ಸ್ಪಷ್ಟವಾಗಿಯೇ ಹೇಳುತ್ತಾರೆ.

ಜ್ಯೋತಿಷಿಗಳ ಬಳಿಗೆ ತೆರಳುವ ಮುಸಲ್ಮಾನರ ಹೃದಯದಲ್ಲಿ ಈಮಾನ್ ಕೂಡ ಇರುವುದಿಲ್ಲ. ಏಕೆಂದರೆ ಒಬ್ಬ ಸತ್ಯವಿಶ್ವಾಸಿಯ ಹೃದಯದಲ್ಲಿ ಜ್ಯೋತಿಷಿಗಳ ಮಾತು ಮತ್ತು ಅಲ್ಲಾಹು ಅವತೀರ್ಣಗೊಳಿಸಿದ ಪವಿತ್ರ ಕುರ್‌ಆನ್ ಒಂದೇ ಸಮಯದಲ್ಲಿ ಇರುವುದಿಲ್ಲವೆಂದು ಪ್ರವಾದಿಯವರು(ಸ) ಹೇಳುತ್ತಾರೆ.

ಅಬೂ ಹುರೈರ(ರ) ರಿಂದ ವರದಿ:  ಪ್ರವಾದಿಯವರು(ಸ)

ಹೇಳಿದರು: "ಯಾರು ಭವಿಷ್ಯ ಹೇಳುವವರ ಬಳಿಗೆ ತೆರಳಿ ಅವರ ಮಾತುಗಳನ್ನು ನಂಬುತ್ತಾರೋ ಅವರು ಮುಹಮ್ಮದ್(ಸ) ರಿಗೆ ಅವತೀರ್ಣವಾದ ಸಂದೇಶವನ್ನು ನಿಷೇಧಿಸಿದ್ದಾರೆ." (ಅಹ್ಮದ್)

ಮುಹಮ್ಮದ್(ಸ) ರಿಗೆ ಅವತೀರ್ಣವಾದ ಸಂದೇಶ ಎಂದರೆ ಕುರ್‌ಆನ್ ಮತ್ತು ಸುನ್ನತ್. ಜ್ಯೋತಿಷಿಗಳ ಬಳಿಗೆ ಹೋಗುವವರು ಇವರಡನ್ನೂ ನಿಷೇಧಿಸಿದವರಿಗೆ ಸಮ. ಜ್ಯೋತಿಷಿಗಳ ಬಳಿಗೆ ನೇರವಾಗಿ ತೆರಳದೆ ದೂರವಾ-ಣಿಯ ಮೂಲಕ, ಸಾಮಾಜಿಕ ಮಾಧ್ಯಮಗಳ ಮೂಲಕ, ಇಂಟರ್‌ನೆಟ್ಟಿನ ಮೂಲಕ ಅಥವಾ ಟಿವಿ ವಾಹಿನಿಯ ಮೂಲಕ ಅವರೊಡನೆ ಭವಿಷ್ಯ ಕೇಳಿ ಅವರು ಹೇಳುವುದನ್ನು ನಂಬಿದರೂ ಈ ಹದೀಸಿನಲ್ಲಿ ನೀಡಲಾದ ಎಚ್ಚರಿಕೆ ಅನ್ವಯವಾಗುತ್ತದೆ. ಅದೇ ರೀತಿ ಪತ್ರಿಕೆಗಳಲ್ಲಿ, ದೂರದರ್ಶನದಲ್ಲಿ ಪ್ರಸಾರವಾಗುವ ಭವಿಷ್ಯವನ್ನು ಓದಿ ನಂಬುವವರು ಮತ್ತು ಅದರ ಪ್ರಕಾರ ಕಾರ್ಯಪ್ರವೃತ್ತ-

ರಾಗುವವರು ಕೂಡ ಇದರಲ್ಲಿ ಒಳಪಡುತ್ತಾರೆ.

ಜ್ಯೋತಿಷಿಗಳ ಮಾತುಗಳನ್ನು ನಂಬುವುದಲ್ಲ, ಅವರ ಬಳಿಗೆ ತೆರಳುವುದೇ ಇಸ್ಲಾಮಿನಲ್ಲಿ ಘೋರ ಅಪರಾಧವಾಗಿದೆ. ಪ್ರವಾದಿ ಪತ್ನಿಯರಲ್ಲಿ ಒಬ್ಬರು ಹೇಳುತ್ತಾರೆ. ಪ್ರವಾದಿಯವರು(ಸ) ಹೇಳಿದರು: "ಭವಿಷ್ಯ ನುಡಿಯುವವರ ಬಳಿಗೆ ತೆರಳಿ ಅವರೊಡನೆ ಏನಾದರೂ ಕೇಳಿದರೆ ಅವರ 40 ದಿನಗಳ ನಮಾಝ್ ಸ್ವೀಕಾರವಾಗುವುದಿಲ್ಲ." (ಮುಸ್ಲಿಂ)

ಮುಸಲ್ಮಾನನಿಗೆ ಸಂಬಂಧಿಸಿದಂತೆ 40 ದಿನಗಳ ನಮಾಝ್ ಸ್ವೀಕಾರವಾಗದೆ ಇರುವುದು ಬಹುದೊಡ್ಡ ಶಿಕ್ಷೆಯಾಗಿದೆ. ಇಂತಹ ಶಿಕ್ಷೆ ಸಿಗಬೇಕಾದರೆ ಆ ಪಾಪದ ಗಂಭೀರತೆ ಎಷ್ಟಿರಬಹುದೆಂದು ಊಹಿಸಿಕೊಳ್ಳಿ, ಅಲ್ಲಾಹು ಕಾಪಾಡಲಿ.

# ಅಗೋಚರ ಜ್ಞಾನ ಮತ್ತು ಜ್ಯೋತಿಷಿಗಳು

ಜ್ಯೋತಿಷಿಗಳಲ್ಲಿ ಯಾರಿಗೂ ಅಗೋಚರ ಜ್ಞಾನ ಅಥವಾ ನಾಳೆ ಏನು ಸಂಭವಿಸುತ್ತದೆ ಎನ್ನುವ ಜ್ಞಾನವಿಲ್ಲ. ಅವರಲ್ಲಿ ಹೆಚ್ಚಿನವರೂ ಊಹಿಸಿಯೇ ಹೇಳುವವರು. ಕೆಲವರು ಜಿನ್ನ್‌ಗಳ ಸಹಾಯ ಪಡೆದು ಭವಿಷ್ಯ ಹೇಳುತ್ತಾರೆ. ಜಿನ್ನ್‌ಗಳು ಆಕಾಶದ ಅಂಚಿನಲ್ಲಿ ಕುಳಿತು ಅಲ್ಲಿ ಮಲಕ್‌ಗಳ ಮಾತುಗಳನ್ನು ಕದ್ದಾಲಿಸುತ್ತಾರೆ. ನಂತರ ಅದನ್ನು ತಮ್ಮ ಆರಾಧಕರಾದ ಜ್ಯೋತಿಷಿಗಳ ಕಿವಿಗಳಲ್ಲಿ ಹಾಕುತ್ತಾರೆ. ಜ್ಯೋತಿಷಿಗಳು ಅದಕ್ಕೆ ನೂರು ಸುಳ್ಳನ್ನು ಬೆರೆಸಿ ಹೇಳುತ್ತಾರೆ. ಇದರ ಹೊರತು ಭವಿಷ್ಯದ ಬಗ್ಗೆ ನಿಖರವಾದ ಜ್ಞಾನ ಜ್ಯೋತಿಷಿಗಳಿಗೂ ಇಲ್ಲ, ಜಿನ್ನ್‌ಗಳಿಗೂ ಇಲ್ಲ.

ಅಗೋಚರ ವಿಷಯಗಳನ್ನು ಮತ್ತು ಭವಿಷ್ಯದಲ್ಲಿ ಸಂಭವಿಸುವ ವಿಷಯಗಳನ್ನು ತಿಳಿದಿರುವವನು ಅಲ್ಲಾಹು

ಮಾತ್ರ. ಅದು ಅಲ್ಲಾಹನಿಗೆ ಮಾತ್ರ ಇರುವ ಒಂದು ಗುಣವಾಗಿದೆ. 'ಆಲಿಮುಲ್ ಗೈಬ್' (ಅದೃಶ್ಯ ಜ್ಞಾನವನ್ನು ತಿಳಿದವನು) ಎಂಬ ಗುಣವಿಶೇಷಣವಿರುವುದು ಅಲ್ಲಾ-ಹನಿಗೆ ಮಾತ್ರ. ಸೃಷ್ಟಿಗಳಲ್ಲಿ ಯಾರಿಗೂ ಈ ಗುಣವಿಲ್ಲ. ಪ್ರವಾದಿಗಳಿಗೂ ಕೂಡ ಇಲ್ಲ. ಪ್ರವಾದಿಗಳಲ್ಲಿ ಮೊಟ್ಟ ಮೊದಲಿಗರಾದ ನೂಹ್(ಅ) ಹೇಳುತ್ತಾರೆ.

"ನನ್ನ ಬಳಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ಹೇಳುವುದಿಲ್ಲ. ನನಗೆ ಅಗೋಚರ ಜ್ಞಾನವಿದೆಯೆಂದು ನಾನು ಹೇಳುವುದಿಲ್ಲ. ನಾನೊಬ್ಬ ಮಲಕ್ ಆಗಿದ್ದೇನೆಂ-ದೂ ನಾನು ಹೇಳುವುದಿಲ್ಲ..." (ಕುರ್‌ಆನ್ 11:31)

ಪ್ರವಾದಿಗಳಲ್ಲಿ ಕಟ್ಟಕಡೆಯವರಾದ ಮುಹಮ್ಮದ್(ಸ) ರೊಡನೆ ಹೀಗೆ ಹೇಳಬೇಕೆಂದು ಅಲ್ಲಾಹು ಆಜ್ಞಾಪಿ-ಸುತ್ತಾನೆ.

"(ಪ್ರವಾದಿಯವರೇ) ಹೇಳಿರಿ. ನನ್ನ ಬಳಿ ಅಲ್ಲಾಹನ

ಖಜಾನೆಗಳಿವೆಯೆಂದು ನಾನು ಹೇಳುವುದಿಲ್ಲ. ನನಗೆ ಅಗೋಚರ ಜ್ಞಾನವಿದೆಯೆಂದು ನಾನು ಹೇಳುವುದಿಲ್ಲ. ನಾನೊಬ್ಬ ಮಲಕ್ ಆಗಿದ್ದೇನೆಂದೂ ನಾನು ಹೇಳುವು-ದಿಲ್ಲ. ನನಗೆ ದಿವ್ಯ ಸಂದೇಶವಾಗಿ ನೀಡಲಾಗುವುದನ್ನು ಮಾತ್ರ ನಾನು ಅನುಸರಿಸುತ್ತೇನೆ...” (ಕುರ್‌ಆನ್ 6:50)

ಇನ್ನೊಂದು ಕಡೆ ಅಲ್ಲಾಹು ಹೇಳುತ್ತಾನೆ.

“(ಪ್ರವಾದಿಯವರೇ) ಹೇಳಿರಿ. ನಾನು ನನಗಾಗಿ ಯಾವುದೇ ಲಾಭವನ್ನು ಅಥವಾ ಹಾನಿಯನ್ನು ಸ್ವಾಧೀನ-ದಲ್ಲಿಟ್ಟುಕೊಂಡಿಲ್ಲ. ಅಲ್ಲಾಹು ಇಚ್ಛಿಸಿದ್ದು ಮಾತ್ರ ನನಗೆ ಸಂಭವಿಸುತ್ತದೆ. ನನಗೆ ಅಗೋಚರ ಜ್ಞಾನವಿರುತ್ತಿದ್ದರೆ (ಭವಿಷ್ಯವು ತಿಳಿದಿದ್ದರೆ) ನಾನು ಹೆಚ್ಚು ಹೆಚ್ಚು ಒಳಿತು-ಗಳನ್ನು ಮಾಡುತ್ತಿದ್ದೆ. ಕೆಡುಕು ನನ್ನನ್ನು ಸ್ಪರ್ಶಿಸುತ್ತಲೇ ಇರಲಿಲ್ಲ. ವಿಶ್ವಾಸವಿಡುವ ಜನರಿಗಾಗಿ ನಾನೊಬ್ಬ ಎಚ್ಚರಿಕೆ ನೀಡುವವನು ಮತ್ತು ಶುಭ ಸುದ್ದಿಯನ್ನು ತಲುಪಿಸುವವ-ನು ಮಾತ್ರವಾಗಿದ್ದೇನೆ.” (ಕುರ್‌ಆನ್ 7:188)

“ಅಗೋಚರ ಜ್ಞಾನಗಳ ಕೀಲಿಕೈಗಳಿರುವುದು ಅಲ್ಲಾಹನಲ್ಲಿ. ಅವುಗಳನ್ನು ಅಲ್ಲಾಹನ ಹೊರತು ಇನ್ನಾರೂ ತಿಳಿದಿಲ್ಲ.” (ಕುರ್‌ಆನ್ 6:59)

“(ಪ್ರವಾದಿಯವರೇ) ಹೇಳಿರಿ. ಆಕಾಶಗಳಲ್ಲಿ ಅಥವಾ ಭೂಮಿಯಲ್ಲಿರುವ ಯಾರೂ ಅಗೋಚರ ಜ್ಞಾನವನ್ನು (ಭವಿಷ್ಯವನ್ನು) ತಿಳಿದಿಲ್ಲ. ಅಲ್ಲಾಹನ ಹೊರತು. ತಮ್ಮನ್ನು ಯಾವಾಗ ಪುನರುತ್ಥಾನಗೊಳಿಸಲಾಗುತ್ತದೆ ಎಂದೂ ಅವರಿಗೆ ತಿಳಿದಿಲ್ಲ.” (ಕುರ್‌ಆನ್ 27:65)